ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ರಾಜ್ಯ ವಿಪತ್ತು ಸ್ಪಂದನಾ ಪಡೆಯ ಕುರಿತು

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) :-

1222 (1422) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯ ವಿಪತ್ತು ಸ್ಪಂದನಾ ಪಡೆ SDRF ಅನ್ನು ರಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, Sಆಖಈ ರಚಿಸಲು ಇರುವ ಮಾರ್ಗಸೂಚಿಗಳೇನು ; ಹಾಗೂ ಇದಕ್ಕಾಗಿ ಬಿಡುಗಡೆಯಾದ ಅನುದಾನವೆಷ್ಟು ;

(ಆ) SDRF ರಚಿಸಲು ಮಂಜೂರಾಗಿರುವ ಹುದ್ದೆಗಳು ಎಷ್ಟು ; ಹುದ್ದೆಗಳನ್ನು ಭರ್ತಿಮಾಡಲು ಇರುವ ಮಾನದಂಡಗಳೇನು ;

(ಇ) ಕರ್ನಾಟಕ ರಾಜ್ಯ ಅಗ್ನಿಶಾಮಕ ಇಲಾಖೆಗೆ ಮಂಜೂರಾಗಿರುವ ಹುದ್ದೆಗಳೆಷ್ಟು ; ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳೆಷ್ಟು ಹಾಗೂ ಖಾಲಿ ಇರುವ ಹುದ್ದೆಗಳೆಷ್ಟು; (ಮಾಹಿತಿ ಒದಗಿಸುವುದು)

(ಈ) ಅಗ್ನಿಶಾಮಕ ಇಲಾಖೆಯಲ್ಲಿ ಹಾಲಿ ಸಿಬ್ಬಂದಿಗಳ ಕೊರತೆ ಇದ್ದರೂ ಸಿಬ್ಬಂದಿಗಳನ್ನು SDRF ಗೆ ನಿಯೋಜಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಇದಕ್ಕೆ, ಅಗ್ನಿಶಾಮಕ ಇಲಾಖೆಯ ಸಿಬ್ಬಂದಿಗಳ ಒಪ್ಪಿಗೆ ಪಡೆಯಲಾಗಿದೆಯೇ ; ಇಲ್ಲದಿದ್ದಲ್ಲಿ, ಹೇಗೆ ನಿಯೋಜಿಸಲಾಗುತ್ತಿದೆ ;

(ಉ) SDRF ಗೆ ನಿಯೋಜಿಸಿದ್ದಲ್ಲಿ ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯುಂಟಾಗಿ ಅಗ್ನಿ ಅನಾಹುತಗಳು, ತುರ್ತು ಕಾರ್ಯಗಳನ್ನು ನಿರ್ವಹಿಸಲು ಸಿಬ್ಬಂದಿಗಳ ಕೊರತೆಯನ್ನು ಯಾವ ರೀತಿ ಪರಿಹರಿಸಲಾಗುವುದು ;

(ಊ) ಅಗ್ನಿಶಾಮಕ ಇಲಾಖೆಯ ಸಿಬ್ಬಂದಿಗಳನ್ನು SDRF ಗೆ ನಿಯೋಜಿಸಿ ಅಗ್ನಿ ಅನಾಹುತ ನಂದಿಸುವ ಕಾರ್ಯದಲ್ಲಿ ಅನುಭವಿಗಳಾದ ಗೃಹರಕ್ಷಕರನ್ನು ನಿಯೋಜಿಸಿದರೆ ಅನಾಹುತಗಳಾಗುವುದಿಲ್ಲವೇ; ಇವೆಲ್ಲವುಗಳನ್ನು ತಪ್ಪಿಸಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು;

(ಋ) ಈಗಾಗಲೇ SDRF ಗೆ ನಿಯೋಜಿಸುತ್ತಿರುವ ಅಗ್ನಿಶಾಮಕ ದಳದ ಸಿಬ್ಬಂದಿಯವರನ್ನು ಇಲಾಖೆಯಲ್ಲಿ ಅಗ್ನಿ ನಂದಿ    ವ ಕಾರ್ಯದಲ್ಲಿ ಮುಂದುವರೆಸಲಾಗುವುದೇ ?